

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1227 (1506) |
| ಮಾನ್ಯ ಸದಸ್ಯರ ಹೆಸರು | ಶ್ರೀ ಗೋವಿಂದರಾಜು (ವಿಧಾನ ಸಭಾ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 10/03/2022 |
| ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆಯಲ್ಲಿ ಕೋವಿಡ್ ಮೊದಲ ಮತ್ತು ಎರಡನೇ ಅಲೆ ಸಂದರ್ಭದಲ್ಲಿ ಸರ್ಕಾರವು ಕಟ್ಟಡ ಕಾರ್ಮಿಕರಿಗೆ ಘೋಷಿಸಿದ ಪರಿಹಾರದ ಪ್ಯಾಕೇಜ್ ಹಣವೆಷ್ಟು; | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ನೋಂದಾಯಿತ ಕಾರ್ಮಿಕರಿಗೆ ಸರ್ಕಾರದ ಆದೇಶದನ್ವಯ ಕೋವಿಡ್ ಮೊದಲನೆ ಅಲೆ ಸಂದರ್ಭದಲ್ಲಿ ಪ್ರತಿ ಫಲಾನುಭವಿಗೆ ತಲಾ ರೂ.5,000/-ಗಳನ್ನು ಮತ್ತು ಕೋವಿಡ್ ಎರಡನೇ ಅಲೆ ಸಂದರ್ಭದಲ್ಲಿ ಪ್ರತಿ ಫಲಾನುಭವಿಗಳಿಗೆ ತಲಾ ರೂ.3,000/-ಗಳ ಪರಿಹಾರ ಹಣವನ್ನು ನೀಡಲಾಗಿರುತ್ತದೆ. |
| ಆ) | ಪರಿಹಾರ ಪ್ಯಾಕೇಜ್ ಹಣವನ್ನು ಪಡೆದ ಫಲಾನುಭವಿಗಳ ತಾಲ್ಲೂಕುವಾರು ಪಟ್ಟಿಯ ವಿವರಗಳನ್ನು ಒದಗಿಸುವುದು: | ಪರಿಹಾರ ಪ್ಯಾಕೇಜ್ ಹಣವನ್ನು ನೋಂದಾಯಿತ ಫಲಾನುಭವಿಗಳಿಗೆ ಡಿಬಿಟಿ (Direct Benefit Transfer) ಮೂಲಕ ಜಮೆ ಮಾಡಿರುವುದರಿಂದ ತಾಲ್ಲೂಕುವಾರು ವಿವರ ಇರುವುದಿಲ್ಲ. ಆದರೆ, ಕೋವಿಡ್ ಮೊದಲನೆ ಅಲೆ ಸಂದರ್ಭದಲ್ಲಿ ಕೋಲಾರ ಜಿಲ್ಲಾ ವ್ಯಾಪ್ತಿಯ ಒಟ್ಟು 66,589 ಫಲಾನುಭವಿಗಳಿಗೆ ಮತ್ತು ಕೋವಿಡ್ ಎರಡನೇ ಅಲೆ ಸಂದರ್ಭದಲ್ಲಿ 62,814 ಫಲಾನುಭವಿಗಳಿಗೆ ಪರಿಹಾರ ಹಣವನ್ನು ನೀಡಲಾಗಿರುತ್ತದೆ. |
| ಇ) | ಅರ್ಜಿ ಸಲ್ಲಿಸಿದವರಲ್ಲಿ ಎಷ್ಟು ಕಾರ್ಮಿಕರಿಗೆ ಪ್ಯಾಕೇಜ್ ಹಣ ನೀಡಲಾಗಿದೆ; ಹಾಗೂ ಇನ್ನೂ ಎಷ್ಟು ಕಾರ್ಮಿಕರಿಗೆ ನೀಡಬೇಕಾಗಿದೆ; | ಕೋವಿಡ್ ಪರಿಹಾರವನ್ನು ಪಡೆಯಲು ಅರ್ಜಿ ಆಹ್ವಾನಿಸಿರುವುದಿಲ್ಲ. ಆದರೆ, ಮಂಡಳಿಯಲ್ಲಿ ಫಲಾನುಭವಿಯಾಗಿ ನೋಂದಣಿಯಾಗುವ ಸಂದರ್ಭದಲ್ಲಿ ಪಡೆಯಲಾಗಿದ್ದ ಬ್ಯಾಂಕ್ ವಿವರ/ಆಧಾರ್ ದಾಖಲೆಗಳ ಆಧಾರದ ಮೇಲೆ ಮೊದಲನೆ ಅಲೆ ಸಂದರ್ಭದಲ್ಲಿ ಒಟ್ಟು 66,589 ಫಲಾನುಭವಿಗಳಿಗೆ ಮತ್ತು ಎರಡನೇ ಅಲೆ ಸಂದರ್ಭದಲ್ಲಿ 62,814 ಫಲಾನುಭವಿಗಳಿಗೆ ನೇರವಾಗಿ ಡಿಬಿಟಿ (Direct Benefit Transfer) ಮೂಲಕ ಪರಿಹಾರ ಮೊತ್ತವನ್ನು ನೀಡಲಾಗಿರುತ್ತದೆ.<br><br>ಎರಡನೇ ಅಲೆಯ ಸಂದರ್ಭದಲ್ಲಿ 5187 ಫಲಾನುಭವಿಗಳ ಬ್ಯಾಂಕ್ ಖಾತೆಯ ವಿವರಗಳು ಆಧಾರ್‌ನೊಂದಿಗೆ ಜೋಡಣೆಯಾಗದ ಕಾರಣ ಸದರಿ ಫಲಾನುಭವಿಗಳಿಗೆ ಹಣ ಜಮೆಯಾಗಿರುವುದಿಲ್ಲ. |
| ಈ) | ಬಾಕಿ ಇದ್ದಲ್ಲಿ, ಉಳಿಸಿಕೊಳ್ಳಲು ಇರುವ ಕಾರಣಗಳೇನು; | |

| | | |
|---|---|---|
| ಉ) | ಕಟ್ಟಡ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿರುವ ಹಣವನ್ನು ಯಾವ ಯಾವ ಯೋಜನೆಗೆ ಬಳಸಿಕೊಳ್ಳಲಾಗಿದೆ; ಅದರ ಮೊತ್ತವೆಷ್ಟು ಹಾಗೂ ಪ್ರಸ್ತುತ ಎಷ್ಟು ಹಣ ಕಟ್ಟಡ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಬಾಕಿ ಇದೆ? | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ನೋಂದಾಯಿತ ಫಲಾನುಭವಿಗಳು ಮತ್ತು ಅವರ ಅವಲಂಬಿತರಿಗಾಗಿ ರೂಪಿಸಿರುವ ಯೋಜನೆಗಳಿಗಾಗಿ ಬಳಸಿಕೊಳ್ಳಲಾಗಿದೆ. ಯೋಜನೆಗಳ ವಿವರವನ್ನು ಅನುಬಂಧದಲ್ಲಿ ಲಗತ್ತಿಸಿದೆ. ಈ ಯೋಜನೆಗಳಿಗೆ ಇದುವರೆಗೂ ರೂ. 1340.59 ಕೋಟಿಯಷ್ಟು ಮೊತ್ತವನ್ನು ಖರ್ಚು ಮಾಡಲಾಗಿದೆ. ಮಂಡಳಿಯ ಕಲ್ಯಾಣ ಸುಂಕ ನಿಧಿಯಲ್ಲಿ ಪ್ರಸ್ತುತ ರೂ.7510.10 ಕೋಟಿಗಳಷ್ಟು ಮೊತ್ತ ಲಭ್ಯವಿರುತ್ತದೆ. |

**ಕಾಇ 158 ಎಲ್ಇಟಿ 2022**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ

## ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಸಿಗುವ ಸೌಲಭ್ಯಗಳು;

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆಮಾಸಿಕ ರೂ.2,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1000/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. ಟ್ರೈನಿಂಗ್-ಕಮ್-ಟೂಲ್‌ಕಿಟ್‌ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯಅವಲಂಭಿತರಿಗೆ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆರೂ. 30,000/- ಮತ್ತುಗಂಡು ಮಗುವಿನ ಜನನಕ್ಕೆರೂ.20,000/-
9. ಶಿಶು ಪಾಲನಾ ಸೌಲಭ್ಯ:
10. ಅಂತ್ಯಕ್ರಿಯೆವೆಚ್ಚ:ರೂ.4,000/- ಹಾಗೂ ಅನುಗ್ರಹ ರಾಶಿ ರೂ.50,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರಸಂ. | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತುದ್ವಿತೀಯಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪ್ಯಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ 2 ವರ್ಷಅವಧಿಗೆ ಒಳಪಟ್ಟು |
| ತಾಂತ್ರೀಕ/ ವೈದ್ಯಕೀಯಎನ್‌ಇಇಟಿಅಥವಾ ಕೆಸಿಇಟಿ | | |

| | | |
|---|---|---|
| 12 | ಬಿಇ / ಬಿ.ಟೆಕ್ಅಥವಾ ಸಂಬಂಧಪಟ್ಟಯೂಜಿಕೋರ್ಸ್ | ಸದರಿ ಕೋರ್ಸ್ನಗರಿಷ್ಠ 2 ವರ್ಷಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರಕೋರ್ಸ್) | ಸದರಿ ಕೋರ್ಸ್ನಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್ಎಮ್‌ಎಸ್‌ಕೋರ್ಸ್‌ಗೆಅಥವಾಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರಕೋರ್ಸ್ | ರೂ.60,000 (ಸದರಿ ಕೋರ್ಸ್ನಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್ನಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್‌ರಿಸರ್ಚ್ ಫೆಲೋಶಿಪ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್‌ಐಟಿ/ ಐಐಎಸ್‌ಇಆರ್/ ಎಐಐಎಮ್‌ಎಸ್ /ಎನ್‌ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋದನಾ ಶುಲ್ಕ |

12. ವೈದ್ಯಕೀಯ ಸಹಾಯಧನ (ಕಾರ್ಮಿಕಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರಅವಲಂಭಿತರಿಗೆರೂ.300/- ರಿಂದರೂ.10,000/-ವರೆಗೆ

13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ**ರೂ.5,00,000/-**, ಸಂಪೂರ್ಣ ಶಾಶ್ವತದುರ್ಬಲತೆಯಾದಲ್ಲಿ **ರೂ.2,00,000/-** ಮತ್ತುಭಾಗಶಃ ಶಾಶ್ವತದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದತೊಂದರೆಗೆ ಸಂಬಂಧಿತಚಿಕಿತ್ಸೆ, ಮೂತ್ರ ಪಿಂಡದಲ್ಲಿನಕಲ್ಲುತೆಗೆಯುವಚಿಕಿತ್ಸೆ, ಮೆದುಳಿನ ರಕ್ತಸ್ರಾವದಚಿಕಿತ್ಸೆ, ಅಲ್ಸರ್‌ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್‌ಚಿಕಿತ್ಸೆ, ಇತರೆಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾಅವರಇಬ್ಬರು ಮಕ್ಕಳ ಮದುವೆಗೆತಲಾ **ರೂ.50,000/-**
16. **ಫಲಾನುಭವಿಯ ಮಕ್ಕಳು ಯುಪಿಎಸ್‌ಸಿ, ಕೆಪಿಎಸ್‌ಸಿ ಹುದ್ದೆಗಳಿಗಾಗಿ ಸ್ಪಾರ್ಧಾತ್ಮಕ ಪರೀಕ್ಷೆಗಳನ್ನು** ಎದುರಿಸಲು ಪ್ರತಿಷ್ಠಿತ ಸಂಸ್ಥೆಗಳಿಂದ ತರಬೇತಿ ಮತ್ತುಅವರ ಮಕ್ಕಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲುತಗಲುವ ವೆಚ್ಚವನ್ನು ಮಂಡಳಿವತಿಯಿಂದ ಭರಿಸಲಾಗುವುದು.
17. **ಬಿಎಂಟಿಸಿ- ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತಕಟ್ಟಡಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿತೊಡಗಿರುವ ನೋಂದಾಯಿತಕಾರ್ಮಿಕರಇಬ್ಬರು ಮಕ್ಕಳಿಗೆ ( ಈಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ**ರೂ.6,000/-** ಗಳ ಸಹಾಯಧನ.